

# ತುಂಟನ ಪದಗಳು



ವಿ. ಜಿ. ಭಟ್ಟ



ಪರ್ಣಕುಟಿ ಗ್ರಂಥಮಾಲೆ
ಧಾರವಾಡ



# ತುಂಟನ ಪದಗಳು

ಪಿ. ಜಿ. ಭಟ್ಟ

ಪರ್ಣಕುಟಿ ಗ್ರಂಥಮಾಲೆ, ಧಾರವಾಡ

ಸಂಪಾದಕರು ಮತ್ತು ಪ್ರಕಾಶಕರು
ವ್ಹಿ. ಚಿತ್ತಾಲ, ಬಿ. ಎ. ಎಲ್ ಎಲ್ ಬಿ., ವಕೀಲ, ಧಾರವಾಡ



ಮುದ್ರಕರು
ಎಸ್. ಎಮ್. ಕುಲಕರಣಿ ಲಲಿತ ಮುದ್ರಣಾಲಯ ಧಾರವಾಡ

ಬೆಲೆ: ಹದಿನಾರಾಣೆ
( ಅರ್ಥಾತ್ ಆಣೆಗೆ ಆಕ್ಷೆ ಪದಗಳು )

# ಮುನ್ನುಡಿ

ನನ್ನ ತರುಣ ಸ್ನೇಹಿತರಾದ ಶ್ರೀ. ವಿ. ಜಿ. ಭಟ್ಟರು ಚಿಕ್ಕಮಕ್ಕಳ ಹಿರಿಯ ಕವಿಗಳಾಗಲಿದ್ದಾರೆ. ಅನೇಕ ಮುಖವಾದ ಸಾಹಿತ್ಯ ಸಿದ್ಧಿಯೆಡೆಗೆ ಅವರ ಪ್ರತಿಭೆಯು ಅವರನ್ನು ಕರೆದೊಯ್ಯುತ್ತಲಿದೆ.

ಚಿಕ್ಕಮಕ್ಕಳಿಗಾಗಿ ಒಂದು ವಿಶಿಷ್ಟ ಸಾಹಿತ್ಯವು ಬೇಕೆಂಬ ಉದ್ದೇಶದಿಂದ ಇಂದು ಅಲ್ಲಲ್ಲಿ ಒಂದು ವಿಶಿಷ್ಟ ಸಾಹಿತ್ಯವು ರಚಿತವಾಗುತ್ತಿದೆ. ಆದರೆ ಇಂಥ ಸಾಹಿತ್ಯದಲ್ಲಿಯೂ ಮುಖ್ಯವಾಗಿ ಬೇಕಾದದ್ದು ಸಾಹಿತ್ಯ ಗುಣವೆಂಬುದನ್ನು ನಾವು ಒಮ್ಮೊಮ್ಮೆ ಮರೆಯುತ್ತೇವೆ. ಸುಲಭ ಭಾಷೆ, ವಿಷಯವು ಎಷ್ಟು ಕಠಿಣವಾದರೂ ಅದನ್ನು ಸಜೀವವಾಗಿಸಿ ಅದಕ್ಕೆ ಅರ್ಥದ ವಿವಿಧ ಸ್ತರಗಳನ್ನು ಕಲ್ಪಿಸಿಕೊಡುವ ರೂಪಕತೆ, ಪ್ರಸಾದಗುಣ,–ಇವು ಬಾಲಸಾಹಿತ್ಯದಲ್ಲಿ ಅವಶ್ಯವಾಗಿ ಬೇಕು. ಚಿಕ್ಕಮಕ್ಕಳಿಗಾಗಿ ರಚಿತವಾದ ಕಾವ್ಯದಲ್ಲಿ " ಕಾಗೆ ಕಾ ಕಾ ಎಂದು ಗುಬ್ಬಿ ಚಿಂವ್ ಚಿಂವ್ ಎಂದು " ಎಂಬ ವಾಸ್ತವಿಕತೆಯು ಮಾತ್ರ ಅವರಿಗೆ ಅರ್ಥವಾಗಬಲ್ಲದೆಂಬ ಗ್ರಹಿಕೆಯಿಂದ ರಚನೆಗೆ ಪ್ರಾರಂಭವಾಗಿದ್ದರೆ, ಕಾವ್ಯವು ಬರಿ ಪದ್ಯವಾಗಿ ಮಾತ್ರ ರೂಪಗೊಳ್ಳಬಲ್ಲದು. ಇಂಥ ಪದ್ಯಗಳನ್ನು ಓದಿ ಬೆಳೆದ ಹುಡುಗರಲ್ಲಿ ಕಾವ್ಯದ ವಿಷಯದಲ್ಲಿಯೇ ಒಂದು ತುಚ್ಛ ಭಾವನೆಯು ಉತ್ಪನ್ನವಾದರೆ ಏನಾಶ್ಚರ್ಯ !

ಶ್ರೀ. ಭಟ್ಟರ ಚುಟ್ಕಗಳಲ್ಲಿ ಇಂಥ ಕೃತ್ರಿಮತೆಯಿಲ್ಲ. ಅವರ ಕಾವ್ಯವು ಸಹಜವಾಗಿಯೇ ಚುಟ್ಕಗಳ ರೂಪವನ್ನು ತಳೆದಿದೆ. ಇಲ್ಲಿಯ ಕಲ್ಪನಾ ವೈಚಿತ್ರ್ಯ, ವಿನೋದ, ಸಭ್ಯತೆ, ಇವೆಲ್ಲ ಗುಣಗಳು ಈ ಚುಟ್ಕ ಗಳನ್ನು ಹಿರಿಯರಿಗೂ ಕಿರಿಯರಿಗೂ ಕೂಡಿಯೇ ಪ್ರಿಯವಾಗಿಸುವದರಲ್ಲಿ ಸಂಶಯವಿಲ್ಲ. ಇವರ ಕಥನ ಕವನಗಳೂ ಸನ್ನಿವೇಶಾತ್ಮಕ ಗೀತಗಳೂ ಮಿತ್ರರಾದ ಶ್ರೀ ರಾಜರತ್ನಂ ಹಾಗು ಹೊಯ್ಸಳರವರ ಇಂಥವೇ ಕವನಗಳನ್ನು ನೇರವಾಗಿ ಸರಿಗಟ್ಟಿ ನಿಲ್ಲಬಲ್ಲವು. ಚುಟ್ಕಗಳ ಓದಿನಿಂದ ಚಿಕ್ಕಮಕ್ಕಳ ಕಲ್ಪಕತೆಯು ಕುಂಠಿತವಾಗುವದಿಲ್ಲ; ಜಾಗೃತವಾಗುತ್ತದೆ. ವಿವಿಧ ಛಾಂದಸಿಕ ರೀತಿಗಳ

ಯೋಜನೆಯಿಂದ ಅವರ ಸ್ಮೃತಿಪಥದಲ್ಲಿ ಈ ಕವನಗಳು ಮೇಲಿಂದಮೇಲೆ ಏಳುತ್ತವೆ. ಇಲ್ಲಿಯ ಭಾಷೆಗಿದ್ದ ಮೊನೆ ಹಾಗು ವ್ಯಂಜನದಿಂದ ನುಡಿಯ ಅಳವನ್ನು ಅವರು ಚನ್ನಾಗಿ ಅರಿಯಬಲ್ಲರು. ಈ ಚುಟ್ಕಗಳನ್ನು ಓದಿದ ಎಳೆಯರು ಒಟ್ಟಾರೆ ಕಾವ್ಯದೆಡೆಗೂ ಆಕರ್ಷಿತರಾಗಬಲ್ಲರು. ಈ ಚುಟ್ಕಗಳು ಮೊದಲು ಕಾವ್ಯ. ಎಳೆತನದ ಬೆರಗು,ಬಿನ್ನಾಣ, ವಿನೋದ ಪ್ರಿಯತೆ, ಕಲ್ಪನಾ ವೈಚಿತ್ರ್ಯ,—ಇವು ಶ್ರೀ. ಭಟ್ಟರ ಸಹಜಸಿದ್ಧ ಗುಣಗಳಾಗಿವೆ. ಅಂತೇ ಎಳೆ ಯರಿಗೆ ಕಾವ್ಯದ ಪರಿಚಯವನ್ನು ಮಾಡಿಕೊಡಲು ಇವು ಒಳ್ಳೇ ಸಹಾಯ ಕಾರಿಯಾಗಿವೆ.

ಸಂಸ್ಕೃತದಲ್ಲಿಯ ಮುಕ್ತಕಗಳೂ ಇಂಗ್ಲಿಷಿನಲ್ಲಿಯ ಲಿಮರಿಕ್‌ಗಳೂ ಕನ್ನಡದ ಚುಟಕದ ಪರಂಪರೆಯಲ್ಲಿಯ ಪ್ರಕಾರಗಳು. ಚುಟಕ ಒಂದು ಲಘು ಗೀತ. ಪ್ರಾಸದ ಮೊನೆ, ಮಾತಿನ ಹದನ, ಛಂದಸ್ಸಿನ ಬಿಗುವು, ನಿರೂ ಪಣೆಯ ಮಿತವ್ಯಯ,–ಇವು ಈ ಕಾವ್ಯಪ್ರಕಾರದ ಮುಖ್ಯ ಸಾಧನ–ಸಾಮಗ್ರಿ. ಚುಟಕಗಳಲ್ಲಿ ಎಲ್ಲ ಭಾವನೆಗಳಿಗೂ ಆಸ್ಪದವಿದೆ. ಹಾಸ್ಯ, ವಿಡಂಬನೆ, ಸೌಂದರ್ಯಾನುಭವ, ವಿಮರ್ಶೆ,—ಸಾಹಿತ್ಯಕ್ಕೆ ಇದ್ದ ಅನಂತ ಮುಖಗಳು ಚುಟಕಕ್ಕೂ ಇವೆ. ಆದರೆ ಕಿರಿದರಲ್ಲಿ ಮಾತ್ರ ಹಿರಿಯ ಅರ್ಥ ಮೂಡಿ ಬಂದಿರ ಬೇಕು.

ಭಟ್ಟರ ಚುಟಕಗಳಲ್ಲಿ ನಾವೀನ್ಯತೆಯಿದೆ. ಭಟ್ಟರ ಚುಟಕಗಳ ಒಂದು ವಿಶೇಷ ಗುಣವೆಂದರೆ ಅವುಗಳ ಕಲ್ಪನಾವೈಚಿತ್ರ್ಯ (fantasy) ಇದಕ್ಕೆ ನಾನು ಮನಸೋತಿದ್ದೇನೆ. **ಹಕ್ಕಿ, ಬುದ್ಧಿವಂತಗೂಳಿ, ಪೂಜೆ, ಹೇಟೆ, ಡಬ್ಬಿತುಂಬಕತ್ತಲೆ,** ಇವೇ ಮೊದಲಾದ ಚುಟಕಗಳಲ್ಲಿ ಈ ಗುಣವು ಕಾಣಿಸಿಕೊಳ್ಳುತ್ತಿದೆ. ಇದು ಅವರಲ್ಲಿ ಬೆಳೆದಷ್ಟೂ ನಮಗೆ ಬೇಕು.

ಆದರೆ ಭಟ್ಟರ ಚುಟಕಗಳಲ್ಲಿಯ ಹಾಸ್ಯವೂ ರಮ್ಯವಾಗಿದೆ.

"ದೊಡ್ಡ ಹೊಟ್ಟೆ<br>
ಭಟ್ಟ ತುಪ್ಪ<br>
ಗಟಾ ಗಟಾ ಕುಡಿದನು.

ಅಯ್ಯೊ ಅಪ್ಪ<br>
ಕೆಟ್ಟೆ ಕೆಟ್ಟೆ<br>
ಎಂದು ಚೀರಿ ಮಡಿದನು"

ಎಂಬಿವೇ ಮೊದಲಾದ ಚುಟಕಗಳನ್ನು ಓದಿ ಈ ಊರಿನಲ್ಲಿದ್ದ ಕನ್ನಡಿಗರೆಲ್ಲ ಹೊಟ್ಟೆ ಹುಣ್ಣಾಗುವ ವರೆಗೆ ನಕ್ಕಿದ್ದುಂಟು.

**ದೇವರು** ಎಂಬಲ್ಲಿಯ ವೇದಾಂತ, **ಲೂಟಿ**ಯಲ್ಲಿಯ ದೇಶಾಭಿಮಾನ, **ಕಾರಕೂನ**ದಲ್ಲಿಯ ಕರುಣೆ, **ಯುದ್ಧ**ದಲ್ಲಿಯ ತಿಳುವಳಿಕೆ, **ಕಾರಣ** ಮೊದಲಾದವುಗಳಲ್ಲಿಯ ಸಮತೆ, **ಹಳ್ಳಿಯ ಸಾಲೆ** ಮೊದಲಾದವುಗಳಲ್ಲಿಯ ಉಚಿತ ವಿಮರ್ಶೆ-ವಿಡಂಬನೆ,—ಇವೆಲ್ಲ ಅವರ ಚುಟಕಗಳ ವೈವಿಧ್ಯವನ್ನು ಸಾರುತ್ತವೆ.

ಶ್ರೀ. ವಿ. ಜಿ. ಭಟ್ಟರ ಕಾವ್ಯಶಕ್ತಿಯು ಹೀಗೆಯೇ ವಿಶಿಷ್ಟವಾಗಿ ರೂಪಗೊಂಡು ಹರಿಯಲಿ. ಅವರ ರಸಗಂಗೆ ತೆರೆತೆರೆಯಾಗಲಿ.

ವೀಸನಗರ
ಉತ್ತರ ಗುಜರಾಥ
೧೫—೧೨—೧೯೪೬

**ವಿ. ಕೃ. ಗೋಕಾಕ**

# ಅರಿಕೆ

೧೯೪೬ರಲ್ಲಿ ಕೆಲವು ಚುಟಕಗಳನ್ನು ಬರೆದು ಪ್ರಕಟಿಸುವ ಹುಮ್ಮಸ ದಿಂದ ಪ್ರಿ. ಗೋಕಾಕರ ಮುನ್ನುಡಿಯನ್ನು ಪಡೆದೆ. ೪೮ರಲ್ಲಿ 'ಚುಟಕ' ಎಂಬ ಸಣ್ಣ ಸಂಗ್ರಹವನ್ನು ಪ್ರಕಟಿಸಿದೆ. ಆ ನಂತರ ಬರೆದ ಒಂದಿಷ್ಟು ಪದ ಗಳನ್ನು ಸೇರಿಸಿ ಈ ಸಂಗ್ರಹವನ್ನು ಮಾಡಿದ್ದೇನೆ.

ಈ ಪದಗಳಿಗೆ ಚಿತ್ರಗಳ ವಿವರಣೆ ಇದ್ದಿದ್ದರೆ ಒಳಿತಾಗುತ್ತಿತ್ತು. ಅವುಗಳನ್ನು ಬರೆಯಿಸಿ ಹಾಕುವದು ನನಗೂ ನನ್ನ ಪ್ರಕಾಶಕ ಮಿತ್ರರಿಗೂ ಸಾಧ್ಯವಾಗಲಿಲ್ಲ. ಆದರೆ ಹಿರಿಯರು ಸರಿಯಾಗಿ ಓದಿಕೊಂಡು ಕಿರಿಯರಿಗೆ ಹಾಡಿ ತೋರಿಸಿದರೆ, ಚಿಕ್ಕವರ ಕಲ್ಪನೆಯು ತನಗೆ ಬೇಕಾದಂತೆ ಕುಂಚ ಆಡಿಸಿ ಅವರು ಇಲ್ಲಿಯ ಕೆಲವು ಪದಗಳಿಂದಾದರೂ ಹಿಗ್ಗು ಪಡೆಯುವರೆಂದು ನಂಬಿದ್ದೇನೆ.

ಧಾರವಾಡ<br>೨೪—೯—೫೧

ವಿ. ಜಿ. ಭಟ್ಟ

# ಪರಿವಿಡಿ

## ಅರ್ಪಣ

ನಾಡಿನ ಹಿರಿ ಕಿರಿ
ಮಕ್ಕಳಿಗೀ ಮರಿ–
ಪುಸ್ತಕವನು ನಾ ನೀಡುವೆನು
ಚಿಕ್ಕವರೆಲ್ಲಾ
ದೊಡ್ಡವರಾಗಿ
ದೊಡ್ಡವರೆಲ್ಲಾ
ಚಿಕ್ಕವರಾಗಿ
ಬೆಳೆಯುವುದನು ನಾ ನೋಡುವೆನು

## ಚುಟಕ

ಟಾಕಿಗೇನೊ ತೋಚಿತ:
ಮಸಿಯ ಗುಟಕ
ಕುಡಿದು ಚುಟಕ-
ಗಳನು ಅದೇ ಗೀಚಿತು
ಅದರ ಮಾಟಕೆನ್ನನೋಟ
ಒಲಿದು ಎದೆಗೆ ಬಾಚಿತು
ಚುಟಕ ಬಹಳ ನಾಚಿತು !

## ಹಕ್ಕಿ

ಚಂದ್ರನ ಗಾಡಿ
ಮೋಡದ ರಾಡಿ–
ಹುದಲಲಿ ಹುಗಿದಿತ್ತು
ಬಂದೆನು ನೋಡಿ
ಬಹಳೇ ಹೆದರಿ
ಪಕ್ಕಾ ಮುದರಿ
ಅದಕಿಲ್ಲೋ ಎತ್ತು !

## ಗೊಂಬೆ

ಒಲೆಯಲಿ ಕಂಡ
ನಿಗಿ ನಿಗಿ ಕೆಂಡ
ಕಪ್ಪುರ ಹೆಣ್ಣಿನ
ಕಟ್ಟಿಗೆ ಗಂಡ !

## ಹಣ

ಬಡವರ ಹೆಣ–
ಕೆಡವಲು ಪಣ–
ತೊಡುತಿದೆ
ಝಣ ಝಣ-
ಗುಡುತಿಹ ಹಣ.

## ಹಳ್ಳಿಯ ಸಾಲೆ

ಹಳ್ಳಿಯ ಸಾಲೆ ಚೆಂದ
ಹತ್ತಕೆ ಮಾಸ್ತರ ಬಂದ
ಹುಡುಗರಿಲ್ಲ
ಕೇರಿಯೆಲ್ಲ
ಸುತ್ತಿ ಕರೆದು ತಂದ !

## ದೊಡ್ಡ ಹೊಟ್ಟೆ

ದೊಡ್ಡ ಹೊಟ್ಟೆ
ಭಟ್ಟ ತುಪ್ಪ
ಗಟಾಗಟಾ ಕುಡಿದನು
ಅಯ್ಯೊ ಅಪ್ಪ
ಕೆಟ್ಟೆ ಕೆಟ್ಟೆ
ಎಂದು ಚೀರಿ ಮಡಿದನು.

## ಲೂಟಿ

ನಾಡಿನಲೆಲ್ಲಾ
ಫಿರಂಗಿ ಲೂಟಿ
ನಾಡವರಿಗೆ ಬರಿ
ಲಂಗೋಟಿ.
ಗುಡಿಸಲಿನಲಿ ಅಡ—
ಗಿದರೋ ಅಂಜಿ
ಹಸಿದೊಡಲಿಗೆ ಸಿಗ—
ದಿದೆ ಗಂಜಿ.

# ಡಬ್ಬಿ ತುಂಬ ಕತ್ತಲೆ

ಒಬ್ಬನು-ಹುಂಬ-
ಡಬ್ಬಿಯ ತುಂಬ
ಕಗ್ಗತ್ತಲೆಯನು ತುಂಬಿದನು
ಮುಚ್ಚಳ ಇಕ್ಕಿ
ಕತ್ತಲೆ ಸಿಕ್ಕಿ-
ಬಿದ್ದಿತು ಎಂದೇ ನಂಬಿದನು.

ಮರುದಿನ ಎದ್ದು
ತುಸುವೂ ಸದ್ದು
ಮಾಡದೆ ಮುಚ್ಚಳ ಸರಿಸಿದನು
ಕತ್ತಲೆಯಿಲ್ಲ !
ಮನೆಯೊಳಗೆಲ್ಲಾ
ಹುಡುಕುತ ಕಣ್ಣೀರ್ ಸುರಿಸಿದನು

## ಬುದ್ಧಿವಂತ ಗೂಳಿ

‘ ಜೀವನ ಕ್ಷಣ
ದೇಹವು **ತೃಣ** ’
ಭಟ್ಟರ ಬಾಯ್ ಅಂದಿತು
ಸನಿಯ ನಿಂತ
ಗೂಳಿಗೆಂಥ
ಬುದ್ದಿ ! **ಮೇಯು** ಬಂದಿತು !

## ಚುರುಕು ಬೆಕ್ಕು

ನಮ್ಮ ಚುರುಕು ಬೆಕ್ಕು ಕದ್ದು
ಕಮ್ಮಗಿನ ಕಜ್ಜಾಯ ಮೆದ್ದು
ಬಿಲ ಬಿಲದಿ ತನ್ನುಸಿರ ಕಂಪನು ಊದಿತು
ಇಲಿಯು ಮೂಗನು
ಹೊರಗೆ ಹಾಕಲು
ಅದರ ಪ್ರಾಣವ ಸೇದಿತು !

* ಒಂದು ಭಾವಾನುವಾದ

# ಯುದ್ಧ

ಜಗದ ತುಂಬ ಬುದ್ಧ
ಗಾಂಧಿ ಆದರು ಸುದ್ದ.
ನಾವು ಇಂದು
ಮುಗಿಯಿತೆಂದು
ಹೇಳಬಹುದೆ ಯುದ ?

# ಕಾರಣ

ಆಳೀಗಿಲ್ಲ ಗಂಜೀಕಲ್ಕು
ನಿಲ್ಲೂದಿಲ್ಲ ಒಡ್ಯಾರ್ ಮೆಲ್ಕು
ಅದ್ಕೆ ಇವ್ರೀಗೆ ಅಜೀರ್ಣ
ಅವ್ರೀಗ್ ಹಾಂಗೆ
ಇವ್ರೀಗ್ ಹೀಂಗೆ
ಸಾವ್ ಬರೋಕೆ ಕಾರ್ಣ

## ಲೇಡಿ

ಬೂಟು ಗೀಟು
ಹಾಕಿ ಥೇಟು-
ಲೇಡಿಯಾದಳು
ಅವಳ ದೇಟು
ಕಾಲ್ಗೆ ಬೂಟು
ಬೇಡಿಯಾದವು !

## ಹೇಟೆ

ದೂರದಲ್ಲಿ
ಹುಂಜ ಬಂತು
ಗೂಡಿನಲ್ಲಿ
ಹೇಟೆ ನಿಂತು
ಆ ತುರಾಯಿ ನೋಡಿತು
ಎದುರುಗೊಂಡು
ಕರೆದು ತಂದು
ಸರಬರಾಯಿ ಮಾಡಿತು !

## ಮಂಗನ ಅಪ್ಪನ ಮಹಾಗ್ರಂಥ

ಅವರ ಅಪ್ಪ
ಬಹಳ ದಪ್ಪ
ಪುಸ್ತಕವನು ಬರೆಯಿತು
ಅದನು ಏರಿ
ಕೆಳಗೆ ಹಾರಿ
ಅದರ ಕಾಲು ಮುರಿಯಿತು !

## ಉಸಾಬರಿ

ಕೋಪವು ಬರುವದು
ಸಾಬರಿಗೆ
ಸುಮ್ಮನೆ ಅವರ ಉ-
ಸಾಬರಿಗೆ
ಹೋಗುವುದೇಕೆ ?
ಎಚ್ಚರ-ಜೋಕೆ-
ಅವರ ಕೈಯಲಿದೆ
ಡಂಬೂಕು
ತಲೆಯಲಿ ತುಂಬಿದೆ
ತಂಬಾಕು !

## ಕಾರಕೂನ

ಮನೆಯ ದುಕ್ಕದಲ್ಲಿ ಲೆಕ್ಕ-
ತಪ್ಪಿ ಕಾರಕೂನನು
ಒಡೆಯನನ್ನು ಕ್ಷಮಿಸುಯೆನ್ನು
ವಂತೆ ಕಂಡ ದೀನನು.

## ಕಲಿ

ಎದೆಯಲೊಂದು ಹುಲಿ
ಇರುವ ಮಗುವು ಕಲಿ
ಅಂದಳಮ್ಮ
ಗುಮ್ಮಗಿಮ್ಮ
ಬರದು ಅವನ ಬಳಿ

## ಹುಡುಗನ ಸಿಟ್ಟು

ತಂದೆ ತಾಯಿಗಳ ಹಾಗೇ ತಾನೂ
ಮಾಡಲು ಹೋದನು ಸಿಟ್ಟ
ಅವ್ವನು ಕಿವಿಗಳ ಹರಿದಳು; ಅಪ್ಪ
ಕಿತ್ತೇಬಿಟ್ಟನು ಜುಟ್ಟ !

## ಮರೆವು

ಕಾಶಿಗೆ ಹೋದನು
ಶಂಕರ ಭಟ್ಟ
ಬರುವಾಗಲ್ಲೇ
ಮರೆತೇ ಬಿಟ್ಟ
ಈ ಸಂಸಾರದ
ಸಾರದ, ಭಾರದ
ತಲೆಗಾಧಾರದ
ಆ ಜುಟ್ಟ !

## ಅಜ್ಜಿ

ನನ್ನ ಅಜ್ಜಿಗೆ
ಕಡೆದ ಮಜ್ಜಿಗೆ
ಪ್ರಾಣ. ಅದನೇ ಕುಡಿವಳು
ಕಾಫಿ ಚಹ
ಹೆಸರು ಸಹ
ಅವಳಿಗಾಗದು. ಸಿಡಿವಳು.

# ಪೂಜೆ

ಮಂತ್ರವ ಗೊಣಗುತ
 ಭಟ್ಟರು ಮೂಗಿಗೆ
ನಾಸೀಪುಡಿಯನು ಏರಿಸಲು
 ಸೀನುಗಳಿಂದ
 ಎದುರಿನ ನಂದಾ-
ದೀಪವನೊಮ್ಮೆಲೆ ಆರಿಸಲು
ಮೊದಲೇ ಬಿರು ಬಿರುಕಾಗಿದ್ದಾ ಹಳೆ
ಮುದಿ ಮಾರುತಿ ಮೂರುತಿಯಾ ಮೈ ಶಿಲ
ಆಯಿತು ಎರಡೂವರೆ ಹೋಳು
 ಅದರೊಳಗಿಂದ
 ಹಿರಿ ಕಿರಿ ತಂಡ
ತಂಡದಿ ಬಂದವು ಕರಿ ಚೇಳು !

## ಗೋಡೆ

ಮರ ಮರಕೆ ಅಂಬೋಡೆ
ಆವರೀ ಹೊತ್ತು
ಎದ್ದೇಳುವದು ಗೋಡ
ಮರ ಮರದ ಸುತ್ತೂ

## ದಾರಿ ತಪ್ಪಿದ ಮೋಟಾರು

ಗುಡ್ಡದ ಬಯಲಲಿ
ಹಾರುತಬಂದಿತು
ದಾರಿಯು ತಪ್ಪಿದ ಮೋಟಾರು
ನೋಡುತ ಗುರು ಗುರು
ಹುಲಿ ದನ ಕರು ಮೊಲ
ತಮ್ಮೊಳಗೇ ಯೋ-
ಚಿಸಿದವು ಎಲ ಎಲ !
ಬಾಲವೆ ಇಲ್ಲದ ಇದು ಯಾರು ?

## ಜಬ್ರ್ನ

ಸರ್ದಾರ ಹೆಗಡೇರು
ಎಂಬ ಜರ್ಬಿನಹೆಸರು
ನಮ್ಮ ಪ್ರಾಂತದ ಜನರಿಗೆಲ್ಲ ಗೊತ್ತು
ಅವರ ನೋಟಿನ ಪಿಂಡಿ
ಮೈಯಮೇಲಿನ ಕೆಸರು
ಆರೆಂಟು ಮಣವಾಗಬಹುದು ಒಟ್ಟು

## ಗರಿ

ಹಳೇಗುಡ್ಡದ ನರಿ
ಬಿಳೇಗುಡ್ಡದ ಕುರಿ
ಜೋಡಿ ಓಡಿ
ನಿಂತು ಅಂತು
" ಹಾರಲು ಇಲ್ಲೋ ಗರಿ "
ಅಂದಿತು ನಕ್ಕು
ಹಕ್ಕಿ " ಚೊಕ್ಕು
ದೇವರ್ ಮಾಡಿದ್ ಸರಿ "

# ಉಪವಾಸ

ನಮ್ಮೂರ ಗಣಪ
ಜೋಯಿಸರಿಗೆ ಉಪ-
ವಾಸವು ಶನಿವಾರ
ಉಪವಾಸದ ದಿನ
ಬರಿ ಹಾಲೂ ಗೆಣ-
ಸಿನದೇ ಅವರಿಗೆ ಫಲಹಾರ

ಆ ಪುಣ್ಯದ ಫಲ-
ದಿಂದೇ ಈ ನೆಲ-
ದಲಿ ಸಾಗಿದೆ ಆ ಸಂಸಾರ

ಮೊನ್ನಿನ ಆ ದಿನ
ಒಂದೆರಡೇ ಮಣ
ಗೆಣಸನು ತೇಗಿ
ಹೊಟ್ಟೆಯು ಬೀಗಿ
ಹರಿದೇ ಹೋಯಿತು ಉಡಿದಾರ
ಅಲ್ಲ
ಜನಿವಾರ !

## ತಂದೆ ತಾಯಿಗಳ ಸಿಟ್ಟು

ಅವ್ವಗೆ ಬಂದರೆ
ತುಸುವೇ ಸಿಟ್ಟು
ಅಪ್ಪನು ಹೋಗುವ
ಮನೆಯನು ಬಿಟ್ಟು
ಅಪ್ಪಗೆ ಬಂದರೆ
ಅದ್ಭುತ ಸಿಟ್ಟು
ಅವ್ವ ಮಾಡುವಳು
ಥಾಲೀಪಿಟ್ಟು !

## ಮುದುಕನ ಸಿಟ್ಟು

ಡೌಲು ಡೌಲಿನ ಸೊಸೆಯನು
ಅವಳ ಕಪ್ಪು ಬಸೆಯನು
ಕಂಡು ಕಂಡು
ಕೋಪಗೊಂಡು
ಹರಿದ ಅಂಗಿಯ ಕಸೆಯನು !

# ಕನಸಿನಲ್ಲಿ

ಕಾಡಿಗೆ ಹೋದೆನು ಕನಸಿನಲಿ
ಒಯ್ಯಿತು ನನ್ನನು ಪಟ್ಟೆಹುಲಿ
ಸೊಂಡಿಲಿನಲಿ ತಣ್ಣೀರನು ತಂದು
ಆನೆಯು ಜಳಕವ ಮಾಡಿಸಿತು
ಮರಗಳು ನೀಡಿದ ಹಣ್ಣುಗಳನ್ನು
ಸಿಂಹವು ಊಡಿಸಿತು.

ಹಂಸಗಳೆಲ್ಲಾ ಹಾಸಿಗೆ ಮಾಡಿ
ಹಕ್ಕಿಗಳೆಲ್ಲಾ ಹಾಡನು ಹಾಡಿ
ಹೊಲಗಳು ಕತೆಯನು ಹೇಳಿದವು
ನಿಮ್ಮೂರಿನ ಮಳೆ ಬೆಳೆ ಹೇಗೆಂದು
ನರಿಗಳು ಕೇಳಿದವು

ಗಾಳಿಯ ಹಾಕಿತು ನವಿಲಿನ ಹಿಂಡು
ಇವನೆಲ್ಲಾ ನನ್ನಪ್ಪನು ಕಂಡು
ಕೈಯಲಿ ಛಡಿಯನು ಹಿಡಿದೇ ಬಂದು
“ ನನ್ನನು ಕೇಳದೆ ಯಾತಕೆ ಬಂದೆ ?
ಎಂದಬ್ಬರಿಸಲು ಹೆದರಿಕೆಯಿಂದೆ
ಪ್ರಾಣಿಗಳೆಲ್ಲಾ ಓಡಿದವು
ದೂರದಿ ಗವಿಯಲಿ ಸುಮ್ಮನೆ ನಿಂತು
ಅಪ್ಪನ ನೋಡಿದವು

ಬೆನ್ನಿಗೆ ಛಡಿಗಳು ಬೀಳಲು ಅಯ್ಯೋ
ಅಯ್ಯೋ ಎಂದತ್ತೆ
ಎಚ್ಚರವಾಯಿತು. ಅಪ್ಪನು ಇಲ್ಲ !
ಕಾಡಿಗೆ ಹೋಗಲು ಆಗಲೆ ಇಲ್ಲ
ಎಂದೆಂದೂ ಮತ್ತೆ.

## ಕುಣಿತ

ಥಕ್ ಥಕ ಥಾ
ಹತ್ತಿರಕ್ಕೆ ಬಾ
ಕೈಯ ತಾ
ಕುಣಿಯುವಾ
ಹ್ಹ ! ಹ್ಹ ! ಹ್ಹಾ !!
ಥಕ್ ಥಕ ಥೈ
ಎತ್ತು ಎರಡು ಕೈ
ನಿನ್ನ ಬೈ–
ದವನ ಹೊಯ್
ಅನ್ನು ಜೈ ಜೈ !

## ಹೊಸ ಗಡಿಗೆ

ಮರಿ ಇಲಿ ಬಂದಿತು
ಪರಿಚಯ ಮಾಡಲು
ಕೆಂಪು ಕೆಂಪು ಹೊಸ ಗಡಿಗೆಯನು
ಅವ್ವನು ಕಂಡು
ಕೋಪಿಸಿಕೊಂಡು
ಬಿಟ್ಟೇ ಬಂದಳು ಅಡಿಗೆಯನು
ಗದೆಯನು ಎತ್ತಿದ
ಭೀಮನ ಹಾಗೆ
ಹಿಡಿದಳು ಮೂಲೆಯ ಬಡಿಗೆಯನು
ಹೊಸ ಹೊಸ ಗಡಿಗೆಯು ಚೂರಾಯ್ತು
ಮರಿ ಇಲಿ ಬಿಲದಲಿ ಪಾರಾಯ್ತು !

## —ರೆ

ಭೂಮಿಯು ಬಾನನು
ಮುಟ್ಟಲು ಎದ್ದರೆ
ಚುಕ್ಕೆಯನೆಲ್ಲಾ ಹೆಕ್ಕುವೆನು
ಬಾನವೂ ಭೂಮಿಗೆ
ಹರಿದೇ ಬಿದ್ದರೆ
ಚಂದ್ರನ ಮೋರೆಯ ಕುಕ್ಕುವೆನು !

## ಬಹಳ ಉದ್ದ ಕತೆ

ಒಂದು ಊರಿನಲಿ ಒಬ್ಬ
ಮುದುಕಿಯಿದ್ದಳು
ಒಂದು ದಿವಸ ಒಂದು ದಿಬ್ಬ
ಏರುವಾಗ ಅವಳು "ಅ....ಬ್ಬ"
ಎಂದು ಬಿದ್ದಳು
ಮುದುಕಿ ತಲೆಯು ತಾಗಿ ತೊಂದು
ಕರಿಯ ಕಲ್ಲಿಗೆ
ಸತ್ತು ಹೋದಳವಳು. ಕತೆಯು
ಮುಗಿಯಿತಿಲ್ಲಿಗೆ

* * *

ಹೀಗೆ ಮುದುಕಿ ಬಿದ್ದು ಸತ್ತು–
ಹೋಗದಿದ್ದರೆ
ಕತೆಯು ಮುಂದೆ ಸಾಗುತಿತ್ತು
ಬಹಳ ಉದ್ದಕೆ !

## ಯೋಗಿ

ಅರಿವೆ ಮಡಿಕೆ ಹಣ
ಕಳೆದು ಭಣ ಭಣ
ಗುಡಿಸಲಾಗಿ
ಅವನು ಯೋಗಿ–
ಯಾದ ಅದೇ ದಿನ

# ಮುಂಬೈ

ಸಗ್ಣೀಸುತ್ಲೊ ನೊಣ
ಮುತ್ಕೊಂಬ್ಡಾಂಗೆ ಜನ
ಮುಂಬೈಗೆರ್ಗಿ
ಸೊರ್ಗಿ
ಬರ್ಗಿ ಹಣ
ಮಾಡ್ಬುಟ್ರಪ್ಪ
ನಮ್ಮೂರ್ ಭಣ ಭಣ

# ಪೌಷ್ಟಿಕ ಆಹಾರ

ಇದ್ದಲಿ ತಿಂದು
ನೀರನು ಕುಡಿದು
ಹೀಗೋಡುವದೀ ಉಗಿಬಂಡಿ
ಹೇಗೋಡುವದೋ
ಹೇಳಲು ಬಾರದು
ತಿಂದರೆ ಇದು ಕೆನೆಹಾಲ್ ತಿಂಡಿ

# ಕರು

ಕರುವಿನ ಜೋಡಿಗೆ ಹುಲ್ಲನು ಮೆಂದಿತು
ಆಕಳು ಗುಡ್ಡದ ಓರೆಯಲಿ

ಬಂದಿತು ಕೂಗುತ ಗವಿಯೊಳಗಿಂದ
ಮೇಯುವ ಎರಡೇ ಪಶುಗಳ ಕಂಡ
ಹದಿನಾರ್ ಮೆಟ್ಟಿನ ಪಟ್ಟೆಹುಲಿ!

ಹುಲಿಯಬ್ಬರವನು ಕೇಳಿದ ಆಕಳು
ಓಡಿತು ಕರುವನು ಕರೆಯುತ್ತಾ
ಓಡುವುದಾಗದೆ ಕೂಗುವ ಕರುವನು
ಮಾಡಿತು ಪಟ್ಟೆಯಹುಲಿ ತುತ್ತ

ಹುಲಿ ಬಾಯಿಗೆ ಕರು ಬಿದ್ದಿತುಯೆಂದು
ಆಕಳು ಮನದಲಿ ಬಹಳೇ ನೊಂದು
ಅತ್ತಿತು ಕೆಲದಿನ ಹಗಲಿರುಳೂ
ಆದರೆ ಆಕಳ ಗಂಡನು ಬಂದು
ಅಂದಿತು ಹೆಂಡತಿ ಅಳುವುದ ಕಂಡು
" ಸತ್ತವರಿಗೆ ಅಳುವದು ಮರುಳು "

× × ×

ಹೀಗೇ ದಿನಗಳು ಕಳೆಯಲು ಆಕಳು
ಹೆತ್ತಿತು ಕರುವನು ಮತ್ತೊಂದ
ಕೆಲವು ತಿಂಗಳಲಿ ತಾಯಿಯ ಜತೆಗೆ
ಮೇಯಲು ಹೊರಟಿತು ಎಳೆಕಂದ

ಕರುವಿನ ಜೋಡಿಗೆ ಹುಲ್ಲನು ಮೆಂದಿತು
ಆಕಳು ಗುಡ್ಡದ ಓರೆಯಲಿ

ಬಂದಿತು ಕೂಗುತ ಗವಿಯೊಳಗಿಂದ
ಮೇಯುವ ಎರಡೇ ಪಶುಗಳ ಕಂಡ
ಹದಿನಾರ್ ಮೆಟ್ಟಿನ ಪಟ್ಟೆಹುಲಿ!

ಈ ಸಲ ಆಕಳನೇ ಮುರಿಯಿತು ಹುಲಿ
ಬದುಕಿತು ಕರು ಹಿಂಡಿನ ಮರೆಗೆ
ಆದರೆ ಅಂಬೇ ಅಂಬೇ ಎಂದು
ಹುಲಿಯು ಹೋದರೂ ಅಲ್ಲೇ ನಿಂದು
ಕೂಗಿತು ಕರು ಸಾಯುವವರೆಗೆ.

× × ×

ಅಲ್ಲಿಗೆ ಆಕಳ ಗಂಡನು ಬಂದು
ಅಂದಿತು ಹೆಂಡತಿ ಹೆಣವನು ಕಂಡು
“ ಅಯ್ಯೋ ಕತ್ತರಿಸಿತು ಕರುಳು ”

## ಶಾಂಭಟ್ಟನ ನೆಗಡಿ!

ನಾಸೀಪುಡಿಯನು
ಮೂಗಿಗೆ ತುರುಕಿ
ಸೀನಿದ ನೆರೆಮನೆ ಶಾಂಭಟ್ಟ
ಎಚ್ಚರ ತಪ್ಪಿತು
ಸನಿಯದ ಮುದುಕಿ
ಅದರಿತು ನೆಲ, ನಮ್ಮನೆ ಅಟ್ಟ !

## ಕಂಡೆ!

ಅಕ್ಕನ ಬೆನ್ನಿಗೆ
ಅಕ್ಕನ ಹೆಳಲು
ಅಣ್ಣನ ಕೈಯಲಿ
ಬಣ್ಣದ ಕೊಳಲು
ಹಣ್ಣಿನ ಸಿಪ್ಪೆಯ
ಒಳಗಡೆ ತಿಳಲು
ಇವುಗಳ ಕಂಡೆನು ನಾನಂದು
ಕಡಲ ತೀರದಲಿ
ಎಲ್ಲಾ ಮಳಲು
ಮಂದಿಯ ಬೆನ್ನಿಗೆ
ಮಂದಿಯ ನೆಳಲು
ಇರುವುದ ಕಂಡೆನು ನಾನಿಂದು !

## ಸತ್ಯ

ಮಳೆಯ ಮೋಡ ಕಪ್ಪು
ಕಡಲ ನೀರು ಉಪ್ಪು
ಹುಡುಗನೆಂದ ಮಾತು ಮುದುಕ
ತಂದೆಗೆಲ್ಲಾ ತಪ್ಪು

## ದಾನ

ಅಂಗಳದಲಿ ಅರ್ಧ ತಾಸು
ನಿಂತ ಬಡವ. ಒಬ್ಬರೂ
ಬಂದು ಹೊರಗೆ ನೀಡಲಿಲ್ಲ
ಒಂದು ಚಿಕ್ಕ ಹಳೆಯ ಕಾಸು
ಕಂಡು ಗೊಂಬೆಗಿಟ್ಟ ಬೆಲ್ಲ
ತಂದು ಕೊಡಲು ಪುಟ್ಟ ವಾಸು
ಎಂಥ ಅಬ್ಬರು ! ಒಳಗೆ
ಎಂಥ ಅಬ್ಬರು !

## ಕಪ್ಪು

ಬಿಳಿಯ ಮೋಡಕಿಲ್ಲ ಮಳೆ
ಬಿಳಿಯ ಮೋರೆಗಿಲ್ಲ ಕಳೆ
ಕಪ್ಪು
ಒಪ್ಪು
ಎಂಬ ಮಾತು ಬಹಳ ಬಹಳ ಹಳೆ

## ರೇಶನ್

ರೇಶನಂಗಡಿ
ನಮಗೆ ಹೊಸ ಗುಡಿ
ಅಲ್ಲಿಹೋಗಿ
ಬಾಗಿ ಬಾಗಿ
ನಿಲ್ಲುವಾ ನಡಿ !

## ಗೆದ್ದಲಿಯು ಕಾಟ

ಪ್ಪ ಬಾ
ಬೇಗ ತಾ
ಒಂದು ಹಾರೆ ಗುದ್ದಲಿ
ನಿದ್ದೆಹೋದ
ಅಜ್ಜಿಮೇಲೆ
ಎದ್ದಿರುವದು ಗೆದ್ದಲಿ !

## ಚೆಂದ !

ಅವ್ವನ ಹಣೆಯಲಿ
ಕುಂಕುಮ ಚೆಂದ
ಅಪ್ಪನ ಹಣೆಯಲಿ
ಶ್ರೀಗಂಧ !

ಎಲೆಗಳ ಮರೆಯಲಿ
ಹೂಗಳು ಚೆಂದ
ಅವ್ವನ ತೊಡೆಯಲಿ
ಈ ಕಂದ !
ಕೊಟ್ಟಿಗೆ ತುಂಬಾ
ಅಂಬಾ ಅಂಬಾ
ಅನ್ನುವ ಆಕಳ ಕರು ಚೆಂದ

ಎಲ್ಲದಕಿಂತಾ
ಚೆಂದಾ ಚೆಂದಾ
ಅನ್ನುವ ಮಕ್ಕಳೆ ಬಲು ಚೆಂದ !

## ನಗರದ ಹೊಲಸು

ಅಬ್ಬಾ ನಗರದ ಕೊಳಚೆಯ ಸಂದಿ !
ಉದುರಿತು ಮೂಗಿನ ಎಲ್ಲಾ ರೋಮ
ಹೇಗೆ ಇರುವರೋ ಇಲ್ಲಿಯ ಮಂದಿ !
ಇವರಿಗೆ ಬೇಡವೆಬೇಡ ಹಜಾಮ !!

# ಪುಟ್ಟ ಮಲ್ಲ

ಬಹಳ ಕೆಟ್ಟ ಹುಡುಗ—ನೋಡಿ
ನಮ್ಮ ಪುಟ್ಟ ಮಲ್ಲನು
ಓದು ಓದು ಅಂದರೆ
ಕಣ್ಣು ತೆರೆಯಲೊಲ್ಲನು.
" ಬೇಗ ಉಣ್ಣು ಮಲ್ಲ " ಅಂದೆ
ಊಟಬಿಟ್ಟು ಓಡಿದ
" ಕೂತುಕೊಳ್ಳೊ ಸುಮ್ಮನೇ "
ಎನಲು ರಾಗಮಾಡಿದ !

ಬಹಳ ಕೆಟ್ಟ ಹುಡುಗ—ನೋಡಿ
ನಮ್ಮ ಪುಟ್ಟ ಮಲ್ಲನು
ಮಾಡು ಎಂದ ಕೆಲಸವನ್ನು
ಅವನು ಮಾಡಲೊಲ್ಲನು.
ಒಮ್ಮೆ " ಉಣ್ಣಬೇಡ " ಅಂದೆ
ಬಹಳ ಊಟಮಾಡಿದ
" ಓದಬೇಡ " ಎನಲು ಪಾಠ
ಓದಿ, ಪದವ ಹಾಡಿದ !

ಬಹಳ ಕೆಟ್ಟ ಹುಡುಗ—ನೋಡಿ
ನಮ್ಮ ಪುಟ್ಟ ಮಲ್ಲನು
ಮಾಡಬೇಡ ಎಂದ ಕೆಲಸ
ಮಾಡಿಬಿಡುವ ಮಳ್ಳನು !

# ರಾಜುಗೆ ಶಿಕ್ಷೆ

ಅಪ್ಪನು ಕೇಳಿದ " ಒಡೆದವರಾರು
ಹಳೆ ಕಂದೀಲಿನ ಹೊಸ ಕಾಜು? "
ಅಂದಳು ಅವ್ವನು " ನಾನೇನಲ್ಲ
ಒಡೆದಿರಬಹುದು ಮಗು, ರಾಜು "

ಅಪ್ಪನು ಕೇಳಿದ ನನ್ನನು " ಏಕೆ
ಕಾಜನು ಒಡೆದದ್ದು ? "
" ನಾನೇನಲ್ಲಾ " ಅಂದರು ಬಿದ್ದಿತು
ಬೆನ್ನಿಗೆ ಮೂರ್ ಗುದ್ದು.

" ಸುಳ್ಳನು ಹೇಳುವಿಯೇನೋ ? " ಎಂದು
ಅಪ್ಪನು ಕಿವಿಗಳ ಹಿಂಡಿದನು
" ಹೌದೂ ಅನ್ನು. ಸತ್ಯವ ಬೊಗುಳು "
ಅಂದಳು ಅವ್ವನು ಕಂಡಿದನು.

ಅವ್ವನ ಮಾತಿಗೆ " ಹೌದೂ " ಅಂದೆ
" ಯಾತಕೆ ಒಡೆದೆ ? " ಎನ್ನುತ ತಂದೆ
ಕಡಿಕಡಿದನು ಹಲ್ಲ.

ಕಾಜನು ಒಡೆದವ ನಾನೇನಲ್ಲ
ದೇವರ ಆಣೆ: ಹೇಳೆನು ಸುಳ್ಳ
ಅವ್ವನೆ ಕಾಜನು ಒಡೆದಿರಬಹುದೇ ?
ಅವಳಿಗೆ ಸಹ ಅವ ಹೊಡೆದಿರಬಹುದೇ !
ಏನೂ ಗೊತ್ತಿಲ್ಲ
ನನಗೆ ಏನೂ ಗೊತ್ತಿಲ್ಲ

## ಅಕಾರಣ

ದಿನ ದಿನ ತುಂಟನು ಅಕ್ಕನ ಜೋಡಿ
ಕಾರಣವಿಲ್ಲದೆ ಜಗಳಾಡಿ
ಪೆಟ್ಟನು ತಿಂದು
ಮೈ ಕೈ ನೊಂದು
ಹರಿಸುವ ಕಣ್ಣೀರಿನ ಕೋಡಿ

ಮರುದಿನ ಎದ್ದು
ಅದೆ ಅದೆ ಗುದ್ದು
ಕಾರಣವಿಲ್ಲದೆ ಜಗಳಾಟ
ಛಡಿಗಳ ಹೊರೆಯನು
ಪುಡಿಮಾಡಿದರೂ
ನಿಲ್ಲದು ತುಂಟನ ಆ ಕಾಟ

ಹೀಗೇ ನಡೆದಿರೆ
ತುಂಟನ ಅಕ್ಕನ
ಮದುವೆಯು ಆಯಿತು ಒಂದು ದಿನ
ಗಂಡನ ಜತೆಯಲಿ
ಅಕ್ಕನು ಹೊರಡಲು
ಅತ್ತನು ತುಂಟನು ಅಕಾರಣ

## ಗಾಳಿ

ಅವ್ವಾ, ಮಳೆಗಾಲದ ಈ ಗಾಳಿ
ಕಣ್ಣಿಗೆ ಕಾಣದ ಸೊಕ್ಕಿನ ಗೂಳಿ
ಮನೆಗಳ ಇರಿಯುವದು
ಗಿಡಮರ ಮುರಿಯುವದು
ನಾನೇ ದೇವರ ಕಿವಿಯಲಿ ಹೇಳಿ
ಸೂರ್ಯನ ತೇರಿಗೆ ಕಟ್ಟಿಸುವೆ
ಗಾಳಿಯ ಸೊಕ್ಕನು ಮೆಟ್ಟಿಸುವೆ

## ಆನಂದ

ಅಪ್ಪನು ಹೊಲದಲಿ ಹೂಡಿದರೆ
ಅವ್ವನು ಅಡಿಗೆಯ ಮಾಡಿದರೆ
ಅಂಗಳದಲಿ ನಾ ಆಡಿದರೆ
ಸೂರ್ಯನು ಮೂಡಿ
ಹಕ್ಕಿಯು ಹಾಡಿ
ಹಗಲಿರುಳಾಗುವವು
ದಿನಗಳು
ಹೇಗೋ ಹೋಗುವವು

# ಅಪ್ಪನ ಭೀತಿ !

ಹೂವೇ ಹೂವೇ ಕಾಮನ ಬಿಲ್ಲೇ
ಬನ್ನಿರಿ ಆಡೋಣ
ಕುಣಿಯುವ ಈ ನಮ್ಮಂಗಳದಲ್ಲೇ
ಹಗರಣ ಮಾಡೋಣ
ಬಾ ಬಾ ಹಕ್ಕಿ ಇದೆ ಅವಲಕ್ಕಿ
ಒಣ ಕೊಬ್ಬರಿ ಬೆಲ್ಲ
ಬನ್ನಿ ಬನ್ನಿ ಥೈ ಥೈ ಅನ್ನಿ
ನಲಿಯುವ ನಾವೆಲ್ಲಾ
ಹೂವು ಹಕ್ಕಿ ಕಾಮನ ಬಿಲ್ಲು
ಕಾಣಿಸದಾದವು ನನಗೆಲ್ಲಿಲ್ಲೂ
ಆದವು ಅವು ಗಪ್ಪ
ಕಿವಿಯಲಿ ಯಾರೋ
ಅಂದರು ಮೆಲ್ಲಗೆ–
" ಹೆದರಿಕೆ ಹೂವಿಗೆ
ಕಾಮನ ಬಿಲ್ಲಿಗೆ
ಇರುವನು ನಿನ್ನಪ್ಪ
ಮನೆಯಲಿ
ಮಗುವೇ ನಿನ್ನಪ್ಪ !"

# ಪುಗ್ಗೆ ವಿಮಾನ

ಪುಗ್ಗೆ ವಿಮಾನವ ಏರುವೆನು
ಅವ್ವಾ ಬಾನಿಗೆ ಹಾರುವೆನು
ಗಾಳಿಯ ಹಿಂಡನು ಓಡಿಸುವೆ
ಸೂರ್ಯಗೆ ಚಂದ್ರನ ಜೋಡಿಸುವೆ
ಅವರ ಮದುವೆಯನು ಮಾಡಿಸುವೆ
ಚುಕ್ಕೆಯ ಮಕ್ಕಳ ಆಡಿಸುವೆ
ಮಿಂಚಿನ ಕೋರೆಯ ದಾಡೆಯ ಕಿತ್ತು
ಕರಿಮೋಡಗಳನು ಕಾರಿಸುವೆ
ನೋಡುತ ಸಿಂದಿರು ಭೂಮಿಯ ಸುತ್ತೂ
ಪುಗ್ಗೆ ವಿಮಾನವ ಹಾರಿಸುವೆ.
ಗುಡುಗಿನ ರಾಕ್ಷಸ ಎದುರಿಗೆ ಬಂದರೆ
ಅವನ ಡೊಳ್ಳನೇ ಬಾರಿಸುವೆ
ದೇವರು ಬೇಡಾಗೀಡಾ ಅಂದರೆ
ಅವ್ವಾ ನಿನ್ನನು ತೋರಿಸುವೆ

## ತ್ರೈರಾಶಿಕ

ನಾಕಕ್ಕೆರಡಾದರೆ, ಎರಡ
ಆಗುವದೋ ಒಂದು
ಅಣ್ಣಾ, ಗುರುಗಳು ಕಲಿಸಿದರೆಮಗೆ
ತ್ರೈರಾಶಿಕ ಇಂದು
ದನಗಳಿಗೆಲ್ಲಾ ಕೋಡುಗಳೆರಡು
ಕಾಲುಗಳಿವೆ ನಾಕು
ಎರಡೇ ಕಾಲುಗಳಿರುವೀ ನಮಗೆ
ಕೋಡೊಂದಿರಬೇಕು !
ಆದರೆ ನಮಗೆ ಕೋಡೇ ಇಲ್ಲ
ಅಣ್ಣಾ, ಸಾಲೆಯ ಗುರುಗಳು ನಮಗೆ
ಕಲಿಸಿದರೋ ಸುಳ್ಳ

## ಬೆಕ್ಕು ಮತ್ತು ಅಪ್ಪ

ಮಿನಿಮಿನಿ ಉರಿಯುವ ದೀಪವು ಇರುವದು
ಬೆಕ್ಕಿನ ಕಣ್ಣಿನ ಗುಡ್ಡದೊಳು
ಅಂತೆಯೆ ಅಲೆದಾಡುವವದು ಸುಲಭದಿ
ಮನಬಂದಂತೇ ಕಾರಿರುಳು
ಸಿಟ್ಟಿಗೆಯೆದ್ದಾಗಪ್ಪನ ಕಣ್ಣು
ಕಿಡಿಕಿಡಿ ಬೆಂಕಿಯ ಕಾರುವದು
ಸಿಟ್ಟು ಅಪ್ಪನಿಗೆ ಎಷ್ಟೇಬರಲಿ
ಬೆಕ್ಕಿನ ಹಾಗೇ ಕಾರಿರುಳಿನಲಿ
ಅವನಿಗೆ ಅಲೆದಾಡಲು ಬರದೆಂದು
ಮನಸಿಗೆ ತೋರುವದು। ನನ್ನ
ಮನಸಿಗೆ ತೋರುವದು.

## ಸಮುದ್ರದ ನೀರು ಉಪ್ಪು ಏಕೆ?

ಶೇಷಶಾಯಿಯ ಕಾಲನೊತ್ತುತ
ಬಳಲಿ ಲಕ್ಷ್ಮಿಯು ಅತ್ತಳು
ಹಾಲಿನಾ ಕಡಲನ್ನು ಕಹಿಕಹಿ
ಉಪ್ಪುಮಾಡಿಯೆ ಬಿಟ್ಟಳು !

## ಕಡಲತೀರದಲ್ಲಿ ಕಪ್ಪೆ

ಕಡಲತೀರದಲಿ
ಕಪ್ಪೆಯು ಕುಳಿತು
ಅಂದಿತು ಮನುಜನು
ಮಾಡಿದ ಒಳಿತು
ತೋಡಿದ ಬಾವಿಯು ನನಗೆಂದು !
ಯಾತಕೊಯೇನೋ
ಇಂತಹ ದೊಡ್ಡ
ಕಡಲನು ಮಾಡಿದ
ದೇವರು ಹೆಡ್ಡ
ಇರಲಿ. ಹೋಗುವೆನು ನಾ ಮಿಂದು
ಅಷ್ಟರಲ್ಲಿಯೇ ತೆರೆಗಳು ಬಂದು
ಹೋದವು ಕಪ್ಪೆಯ ತೊಳಕೊಂಡು

## ತರ್ಕ

ಕಳ್ಳರ ಎಡಕೂ ಬಲಕೂ ಇರುವರು
ಪೋಲೀಸರು ನೋಡು
ಮಂತ್ರಿ ಗಿಂತ್ರಿಗಳು ಇಳಿದಲ್ಲೆಲ್ಲಾ
ಪೋಲೀಸರ ಬೀಡು !

## ಕತ್ತೆಯನ್ನು ಕೊಂದ ನೊಣ*

ಇದ್ದಿತು ಕತ್ತೆಯ ಬೆನ್ನಿನ ಮೇಲೆ
ಕಲ್ಲಿನ ಭಾರವು ಆರು ಮಣ
ಕರಿಯ ಕಲ್ಲುಗಳ ಭಾರದ ತುದಿಗೆ
ಕುಳಿತಿತು ಸುಮ್ಮನೆ ಒಂದುನೊಣ
ಏರನು ಹತ್ತುವುದಾಗದೆ ಕತ್ತೆ
ಅಂದಿತು “ ಅಯ್ಯೋ ಅಪ್ಪಾ ಸತ್ತೆ
ಬದುಕಿಸು ಹೇಗಾದರೂ ನನ್ನ ”
ತನಗೇ ಕತ್ತೆಯು ಹೇಳಿತುಯೆಂದು
ತನ್ನಳವಿಗೆ ನೊಣ ಸಂತಸಗೊಂಡು
ಅಂದಿತು “ ಬಾಗಿಸದಿರು ಚಿನ್ನ ! ”
ಸೊಕ್ಕಿನ ಮಾತಿಗೆ ಕೋಪಿಸಿಕೊಂಡು
ಬಾಲವ ಝಾಡಿಸಿ ನೊಣವನು ಕಂಡು
ಅದನು ಕೊಲ್ಲದೇಬಿಡೆ ತಾನೆಂದು
ಎತ್ತಿತು ಕತ್ತೆಯು ಕಾಲುಗಳ
ನೊಣವು ಹಾರುವಾದಿಕ್ಕಿಗೆ ಒದ್ದು
ದಾರಿಯ ಅಂಚಿನ ತಗ್ಗಿಗೆ ಬಿದ್ದು
ತಪ್ಪಿಸಿಕೊಂಡಿತು ಕೀಲುಗಳ !
ತಗ್ಗಿಗೆ ಬಿದ್ದಾ ಕತ್ತೆಯ ಬೆನ್ನಿಗೆ
ಇದ್ದಿತು ಭಾರವು ಆರು ಮಣ
ಕರಿಯ ಕಲ್ಲುಗಳ ಭಾರದ ತುದಿಗೆ
ಕುಳಿತಿತು ಗರುವದಿ ಅದೇ ನೊಣ !

# ಸೂರ್ಯನಿಗೆ

ಒಂಟಿಯಾಗಿಯೆ ನೀನು ದಿನ ದಿನ
ಒಂದೆ ದಿಕ್ಕಿಗೆ ಮೂಡುವೆ
ಒಂದೆ ದಿಕ್ಕಿಗೆ ಮುಳುಗಿ ಬಾನನ
ಕೆಂಪ ಕೆಂಪಗೆ ಮಾಡುವೆ
ಒಮ್ಮೆಯಾದರು ನಮ್ಮ ಹಿತ್ತಲ
ತುದಿಗೆ ಸೂರ್ಯನೆ ಮೂಡಿ ಬಾ
ಒಮ್ಮೆಯಾದರು ನಿನ್ನ ಬಳಗದ
ಚಂದ್ರ ಚುಕ್ಕೆಯ ಕೂಡಿ ಬಾ
ಒಮ್ಮೆಯಾದರು ನಮ್ಮ ತೋಟದ
ಭಾವಿಯೊಳಗೇ ಮುಳುಗು ಬಾ
ಒಮ್ಮೆಯಾದರು ಬಂದು ಬಿಡು ಇರು-
ಳಲ್ಲಿ ಕತ್ತಲೆ ಬೆಳಗುತ !

## ಗುಲಗಂಜಿ

ಗುಲಗಂಜೀ ಗುಲಗಂಜೀ
ಕೆಂಪು ಗುಲಗಂಜೀ
ಬೇಕೇನು ಪಂಜಿ
ಬಿಳಿ ಬಿಳೀ ಪಂಜಿ ?
ಗುಲಗಂಜೀ ಗುಲಗಂಜೀ
ತಂಪು ಗುಲಗಂಜೀ
ಬೇಕೇನು ಗಂಜಿ
ಬಿಸಿ ಬಿಸೀ ಗಂಜಿ ?
ಜೋತಾಡುತಿದ್ದ ಗುಲಗಂಜಿ
ಮಾತಾಡಲಿಲ್ಲ ಅಂಜಿ !

## ಹರಕೆಯ ಭಾರ

ಇತ್ತಲಾಗಿ ನನ್ನಣ್ಣನ
ಬೆನ್ನು ಬಹಳ ಬಾಗಿದೆ
ಪಾಪ, ತುಂಬು ಹರೆಯದಲ್ಲೇ
ಬಿಲ್ಲಿನಂತೆ ಆಗಿದೆ
ನಮಗೆ ಅದರ ಕಾರಣವೂ
ಅಲ್ಪ ಸ್ವಲ್ಪ ಗೊತ್ತಿದೆ:
ಗುರುಹಿರಿಯರ ಹರಕೆಯ ಅದು
ಮಣಗಟ್ಟಲೆ ಹೊತ್ತಿದೆ !

## ಕನ್ನಡಿ

ಎಣ್ಣೆಯ ಹಚ್ಚಲು
ಕನ್ನಡಿಯಂತೇ
ಹೊಳೆ ಹೊಳೆಯುವುದಜ್ಜನ ಬೋಳು
ಅಪ್ಪಾ, ಗೋಡೆಯ
ಮೇಲಿನ ಕನ್ನಡಿ
ಯಾರಜ್ಜನ ಬೋಳಿನ ಹೋಳು ?
ಅಪ್ಪಾ, ನೀ ಹೇಳು

## ಪ್ರಶ್ನೆ (೧)

ಇದ್ದಳು ಆಚೆಯ ಕೇರಿಯ ತುದಿಗೆ
ಒಬ್ಬಳು ಹಳೆಹಳೆ ಹಣ್‌ಮುದುಕಿ
ಅವಳಿನ್ನೂ ಸತ್ ಹೋಗದೆ ಇದ್ದರೆ
ಇರಲೇ ಬೇಕಲ್ಲವೆ ಬದುಕಿ ?

## ಪ್ರಶ್ನೆ (೨)

ಅವ್ವಾ, ಮುಳ್ಳಿನ ಕಂಟಿಯ ಮೇಲೆ
ಹಾರುವ ಹಕ್ಕಿಗಳೆಲ್ಲಾ ಹೇಗೆ
ಚಿಲಿಪಿಲಿ ಮಾಡುವವು ?
ಕಾಲಿಗೆ ಮುಳ್ಳಿನ ಮೊನೆ ತಾಗಿದರೂ
ಅಳದೇ ಹಾಡುವವು ?

## ಪ್ರಶ್ನೆ (೩)

ಅವ್ವನು ಸಣ್ಣ ತಪ್ಪ
ಮಾಡಲು ಒದರಿ ಅಪ್ಪ
ಹುಚ್ಚನಂತೆ
ಹೊಡೆಯಬಹುದೆ
ಧೊಪ್ಪ ಧೊಪ್ಪ ಧೊಪ್ಪ ?

## ಪ್ರಶ್ನೆ [೪]

ಕತ್ತಲೆ ಕೋಣೆಗೆ ಬೆಳಕನು ತಂದರೆ
ಕತ್ತಲೆಯೆಲ್ಲೋ ಓಡುವದು
ಬೆಳಕಿನ ಬಯಲಿಗೆ ಕತ್ತಲೆ ಬಂದರೆ
ಬೆಳಕೇನೇನನು ಮಾಡುವದು ?



## ಪ್ರಾಸ

ಬೇಟೆ ಪಾಠ ಕಲಿಯಲೆಂದು
ಮದ್ದು ತುಂಬಿ ಕೋವಿಗೆ
ಗುರಿಯ ಹಿಡಿದ ಬಳಿಯ ಗಿಡದ
ಅರಳುತಿದ್ದ ಹೂವಿಗೆ
ಗುರಿಯು ತಪ್ಪಿ ತಾಗಿತೊಂದು
ಮೇಯುತಿದ್ದ ಗೋವಿಗೆ
ನಗೆಯು ಬಂತು ಅದೇ ಗಿಡದ
ಬುಡದ ಬಿಳಿಯ ಹಾವಿಗೆ
ಭೀತಿಯಿಂದ ಹಾರಿಕೊಂಡ
ಕೋವಿಯೊಡನೆ ಭಾವಿಗೆ !

# ಸಂಭಾವಿತ ದೇವರು

ಪೀಠದಿ ಕುಳಿತಾ ದೇವರು ಅಮ್ಮಾ
ಸಂಭಾವಿತ ನೋಡು | ಬಹಳೀ
ಸಂಭಾವಿತ ನೋಡು.
ಇಲಿ ಜೊಂಡಿಂಗದ ಹಿಂಡೇ ಬಂದು
ಪ್ರತಿದಿನ ಕಾಡಿದರೂ
ಗಂಧಾಕ್ಷತೆ ಹೂ ಎಲ್ಲಾ ತಿಂದು
ಸೂರೆಯು ಮಾಡಿದರೂ—
ಪೀಠದ ದೇವರು ಕುಯ್ಗುಡಲೊಲ್ಲ
ಸಂಭಾವಿತ ನೋಡು । ಬಹಳೀ
ಸಂಭಾವಿತ ನೋಡು
ಗಂಟೆ ಜಾಗಟೆಯ ಎಷ್ಟೇ ಬಡಿದರೂ
ಅವ ಹೆದರುವದಿಲ್ಲ
ಚಳಿಗಾಲದಲಿ ತಣ್ಣೀರು ಸುರಿದರೂ
ಅವ ಮುದುರುವದಿಲ್ಲ.
ಅನ್ನದ ಬೋಗುಣಿ
ಎದುರಿಗೆ ಇಟ್ಟು
ನೈವೇದ್ಯದ ನೆವ
ಮಾಡಿಯೆ ಬಿಟ್ಟು
ಅಗಳೂ ಕೊಡದೇ ನಾವೇ ಎಲ್ಲಾ
ಉಂಡರು ಸುದ್ದಾ ಕುಯ್ಗುಡಲೊಲ್ಲ
ಸಂಭಾವಿತ ನೋಡು । ಬಹಳೀ
ಸಂಭಾವಿತ ನೋಡು.

# ಕೋಳಿಯ ಮೊಟ್ಟೆ

ಸಾಬಿ ಗುಳುಮ್ಮನೆ ನುಂಗಿದನೊಮ್ಮೆ
ತಾಜಾ ಕೋಳಿಯ ಮೊಟ್ಟೆಯನು
ಸೇರಿತು ಕೋಳಿಯ ಮೊಟ್ಟೆಯು ಸಾಬಿಯ
ಗುಡಾಣದಂತಹ ಹೊಟ್ಟೆಯನು
ಹೊಟ್ಟೆಯ ಒಳಗಿನ ಮೊಟ್ಟೆಯ ಕೋಳಿ
ಮಲಗಿದ ಸಾಬಿಯ ಹೊಟ್ಟೆಯ ಸೀಳಿ
ಬಂದಿತು ಕೋ ಕೋ ಅನ್ನುತ್ತ !
ಸಾಬಿಯ ಬೀಬಿಯು ಕೋಳಿಯ ಕಂಡು
" ಅರೇ ಖುದಾ ಹೋ ಅಲ್ಲಾ " ಅಂದು
ಗಂಡನ ಸಾವಿಗೆ ಬಹಳೇ ನೊಂದು
ಅವನ ಕೊಂದ ಆ ಕೋಳಿಯ ಕೊಂದು
ತುಕಡಿಯ ಮಾಡಿ–
ರುಚಿಯನು ನೋಡಿ–
ಅತ್ತಳು ಒಬ್ಬಳೆ ತಿನ್ನುತ್ತ !

# ದೇವರು

ಸೂರ್ಯ ಚಂದ್ರರೇ ಆತನ ಕಣ್ಣು
ನೆಲ ಅಂಗಾಲಿಗೆ ಹತ್ತಿದ ಮಣ್ಣು
ಆಕಾಶವೆಮೈ
ಗಾಳಿಯೆ ಕೈ
ಅವನಿಗೆ ಹರಿಹರ
ಭೂತ ನಿಶಾಚರ
ಎಂದೇನೇ ಅಂದರು ಅದು ಸೈ
ಪೂಜಿಸು ಮುಗಿ ಕೈ
ಬೇಕಾದರೆ ಬೈ
ಕುಣಿಸುವ ಲೋಕವ
ಥಕ ಥಕ ಥೈ !

**ವಿ. ಜಿ. ಭಟ್ಟರ ಹೊಸ ಕವನ ಸಂಗ್ರಹ**

# ಕಾವ್ಯವೇದನೆ

ಬೆಲೆ: ಒಂದೂವರೆ ರೂಪಾಯಿ

## ಕೆಲವು ಅಭಿಪ್ರಾಯಗಳು

ಸಪ್ರೇಮ ನಮಸ್ಕಾರಗಳು

ಪ್ರಿಯ ವಿ. ಜಿ. ಭಟ್ಟರೆ,

ತಮ್ಮ ತಾ. ೨೪-೯-೫೧ರ ಕಾಗದ ತಲ್ಪಿತು. ತಮ್ಮ 'ಕಾವ್ಯವೇದನೆ'ಯ ಪ್ರತಿ ತಲ್ಪಿ ಓದಿಯೂ ಆಗಿದೆ. ತಮ್ಮ ಕೃತಿಗಳ ವಿಚಾರದಲ್ಲಿ ಹೊಸತಾಗಿ ಯೇನೂ ಅಭಿಪ್ರಾಯ ಕೊಡಬೇಕಾಗಿಲ್ಲ. ಸಾಹಿತ್ಯನಿರ್ಮಿತಿಯಲ್ಲಿ ನಿಮ್ಮ ದೊಂದು ವಿಶಿಷ್ಟವಾದ ದೃಷ್ಟಿ, ಅಭಿರುಚಿ, ದಾರಿಯಿದ್ದುದು ಪ್ರತಿಯೊಂದು ಕವಿತೆಯಲ್ಲಿಯೂ ಕಂಡುಬರುವುದು. ಸತ್ಯದ ನಿಷ್ಠುರ ಸ್ವರೂಪವನ್ನು ಕಾಣಲು ಜುಗುಪ್ಸೆ ಪಡುವವರು ತಮ್ಮ ಕವಿತೆಗಳನ್ನೋದಿ ಮುಖ ಮುರಿಯಲೂ ಬಹುದು. ಸಂಸ್ಕೃತಿಯ ಸಂಯಮದ ಕಡೆಗೆ ಲಕ್ಷ್ಯವಿರದ ವ್ಯಕ್ತಿಯ ಸ್ವಭಾವ 'ಸ್ವಭಾವ'ವೇ ಆಗಿರುವುದು. ಸಂಸ್ಕೃತಿಯ ಆದರ್ಶದ ಸಾಹಿತ್ಯಿಕ, ಆ 'ಸ್ವಭಾವ'ಗಳನ್ನೆತ್ತಿ ಅವುಗಳ ಬೀಭತ್ಸಸ್ವರೂಪವನ್ನು ತೋರಿಸಬೇಕಾಗುವುದು. ಅವುಗಳನ್ನು ಅಣಕಿಸಬೇಕಾಗುವುದು; ವಿಡಂಬನೆಗೆ ಗುರಿಮಾಡಬೇಕಾಗು ವುದು. ಅದನ್ನು ತಾವು ತಮ್ಮ ಕವಿತೆಗಳಲ್ಲಿ ಚೆನ್ನಾಗಿ ಮಾಡಿದ್ದೀರಿ.

ಕೆಲವು ಜನ ಸಹೃದಯರೆನಿಸಿಕೊಳ್ಳುವವರಿಗೆ ನಿಮ್ಮ ಈ 'ವಿಚಾರ ಗೀತ'ಗಳ ರೀತಿ ಒಪ್ಪಿಗೆಯಾಗಲಿಕ್ಕಿಲ್ಲ. ಅದು ಅವರ ಅಭಿರುಚಿಯೆಂದೋ ಸಾಂಪ್ರದಾಯಿಕ ಪರಿಸ್ಥಿತಿಯಲ್ಲಿ ರೂಪುಗೊಂಡ ಬುದ್ಧಿಯೆಂದೋ ತಿಳಿದು ಸುಮ್ಮನಿರಬೇಕಲ್ಲದೆ, ಮನನೊಂದುಕೊಳ್ಳುವ ಕಾರಣವೇನೂ ಇಲ್ಲ. ಹೊಸ ಕನ್ನಡ ಸಾಹಿತ್ಯದ ನೂತನ ನಿರ್ಮಿತಿಯಲ್ಲಿ 'ರತ್ನನ ಪದ'ದ ತರುವಾಯ ಒಂದು ವೈಶಿಷ್ಟ್ಯವನ್ನು ತುಂಬಿಕೊಂಡು ಬಂದಿರುವ ಇನ್ನೊಂದು ಸಂಕಲನ ತಮ್ಮ 'ಕಾವ್ಯವೇದನೆ'. ಇದಕ್ಕಿಂತ ಹೆಚ್ಚು ಹೇಳಬೇಕಾದ ಆವಶ್ಯಕತೆಯಿಲ್ಲ ವೆಂದು ನನ್ನ ಭಾವನೆ.

ಧಾರವಾಡ
೨೬-೯-೫೧

ತಮ್ಮ ವಿಶ್ವಾಸದ
**ಬೆಟಗೇರಿ ಕೃಷ್ಣಶರ್ಮ**

ಪ್ರಿಯ ಭಟ,

' ಕಾವ್ಯವೇದನೆ ' ಕೈ ಸೇರಿತು. ಓದಿದೆನು ಈ ಮೊದಲೂ ನಿನ್ನ ಕಾವ್ಯ ಸಂಗ್ರಹ ನೋಡಿದ್ದೇನೆ. ಆಗಲೂ ನೀನು ಅಭಿಪ್ರಾಯ ಅಪೇಕ್ಷಿಸಿದಂತಿತ್ತು. ಈ ಸಲ ಈ ಕಾಗದ ಬೇರೆ ಬಂದಿದೆ.

ನಿನಗೆ ಪ್ರಣಯ ಮತ್ತು ಆತ್ಮವಿಚಾರದಲ್ಲಿ ಸ್ವಾನುಭವದಲ್ಲಿಯೋ ಇತರರ ನಡತೆಯಲ್ಲಿಯೋ ಡಂಭಾಚಾರ ಕಂಡಿದೆ. ಜಿಗುಪ್ಸೆ ಬಂದಿದೆ. ಅದನ್ನು ಈ ಕವನಗಳಲ್ಲಿ ಮೂಡಿಸಿದ್ದಾಗಿದೆ. ಇಲ್ಲಿಯ ಅಪಹಾಸ ಉಪಹಾಸದಲ್ಲಿ-ಆ ಶೈಲಿಯ ಗುಣಗಳಿವೆ; ಚೂಪು ಹರಿತ, ವಕ್ರತೆ, ವಿಕಟತೆ, ವಿಕೃತತೆ ಇತ್ಯಾದಿ ಇದರ ಚರ್ವಿತ ಚರ್ವಣದಲ್ಲಿ ನಿನಗೊಂದು ರುಚಿ ಕಂಡಿವೆ. ನನಗೆ ಆ ರುಚಿ ಆ ಮಾನದಲ್ಲಿಲ್ಲ. ಆದಕಾರಣ ಇಂಥ ಕವಿತೆಗಳ ಬಗ್ಗೆ ನನ್ನ ಅಭಿಪ್ರಾಯ ಅಪೇಕ್ಷಣೀಯವಾಗಲಾರದು.

ಇದೇ ಶಕ್ತಿ ಇದಕ್ಕೂ ಸ್ಪೃಹಣೀಯ ಅನುಭವವನ್ನು ವ್ಯಕ್ತಗೊಳಿಸಿದರೆ ರಮ್ಯವೆನಿಸೀತು. ಈ ಬರವಣಿಗೆ ಜಿಗುಪ್ಸೆ ಹುಟ್ಟಿಸುವ ಕಾರ್ಯದಲ್ಲಿ ಅಲ್ಪ ಸ್ವಲ್ಪ ಕೃತಕೃತ್ಯತೆ ಹೊಂದಬಹುದು. ಆದರೆ ಕೆಲ ಹಸಿಮನಗಳಲ್ಲಿ ಇಂಥ ವಿಕೃತಿಯನ್ನೇ ಹುಟ್ಟಿಸಿ,ನೋವಿನಲ್ಲಿಯೇ ರಂಜನೆಯನ್ನು ಹುಡುಕುವ ಮನೋವೃತ್ತಿಯನ್ನು ಪ್ರಬಲಗೊಳಿಸಬಹುದು. ಈ ಮೊದಲು ಈ ಕವನಗಳನ್ನು ಮೆಚ್ಚಿ ತಮ್ಮ ಅಭಿಪ್ರಾಯ ತಿಳಿಸಿದ ರಸಿಕರ ಲೇಖನ ನಾನು ಕಂಡರೆ ನನಗೂ ಇದರ ರುಚಿಯ ಜಾತಿ ತಿಳಿದೀತು. ' ಪ್ರಾ. ವೆಂ ' ' ದ. ಬಾ ' ರವರ ಪ್ರಾಸ್ತಾವಿಕ ಪದ್ಯ ನೋಡಿದ್ದೇನೆ. ಒಮ್ಮೆ ಬೆಟ್ಟಿಯಾದಾಗ ನೀನೂ ಈ ವಿಷಯ ತಿಳಿಸಿ ಹೇಳಿದರೆ ನನಗೆ ತಿಳಿಯುವದೇನೋ ನೋಡೋಣ. ನೀನು ಸಾಕಷ್ಟು ಬರೆದ ಮೇಲೆ ಈ ಬಗೆಯ ' ವೇದನೆ ' ಕಡಮೆಯಾದರೂ ಆದೀತು.

ನಮಸ್ಕಾರ

**ದ. ರಾ. ಬೇಂದ್ರೆ**

'ಕಾವ್ಯವೇದನೆ' ಯನ್ನು ಹೊರತಂದು ಕವಿ ಶ್ರೀ. ವಿ. ಜಿ. ಭಟ್ಟರು ಕನ್ನಡದ ರಸಿಕಕುಲಕ್ಕೆ ನಿಜವಾದ ಹಾಸ್ಯರಸ ಭೋಜನ ಮಾಡಿಸಿದ್ದಾರೆ. ಶ್ರೀ. ಕೈಲಾಸಂ, ಶ್ರೀ. ಜಾಗಿರದಾರ ಮೊದಲಾದ ಹೆಸರಾಂತ ವಿಡಂಬನ (ನಾಟಕ)ಕಾರರು ಹತ್ತಿಪ್ಪತ್ತು ಪುಟಗಳ ಗದ್ಯದಿಂದ ಉಂಟುಮಾಡಿದ ತೀವ್ರ ಪರಿಣಾಮವನ್ನು ಶ್ರೀ. ಭಟ್ಟರು ತಮ್ಮ ಹತ್ತಿಪ್ಪತ್ತು ಪಂಕ್ತಿಗಳ ಅಣಕವಾಡುಗಳಿಂದ ಮಾಡಿದ್ದಾರೆ. ನಮ್ಮಿಂದಿನ ಕನ್ನಡದಲ್ಲಿ ಇವರನ್ನು ಸರಿಗಟ್ಟುವ ಸರಸ ಶೈಲಿಯ ವಿಡಂಬನ ಕವಿಗಳು ಬೇರೊಬ್ಬರಿಲ್ಲವೆಂಬ ಬಗ್ಗೆ ಭಿನ್ನಾಭಿಪ್ರಾಯ ವಿರದು. ಈ ಕಾವ್ಯವೇದನೆಯಲ್ಲಿಯ 'ಪ್ರೇಮಾರಾಧನೆ' ಮತ್ತು 'ಆತ್ಮ ಶೋಧನೆ' ಎಂಬ ಎರಡು ಭಾಗಗಳೂ ಅತ್ಯಂತ ಹೃದಯವೇಧಕವಾದ, ಚಿತ್ತ ಚೋದಕವಾದ ರಸಘುಟಿಕೆಗಳಿಂದ ಕಿಕ್ಕಿರಿದು ತುಂಬಿಕೊಂಡಿವೆ. ಶ್ರೀ. ಭಟ್ಟರ ಕಾವ್ಯಶೈಲಿಯು ಬಹು ಮಧುರ; ಅಷ್ಟೇ ಹರಿತವಾಗಿಯೂ ಅದರ ಅರ್ಥಾವಿಷ್ಕರಣ! ಇಂತಹ ವಿಡಂಬನ ಕವಿಗೆ ನಾಡಿಗೆ ನಾಡೇ ಮಣಿಯಬೇಕು. ಹಾಗೂ ಆತನ ಅನನ್ಯ ಸಾಧಾರಣವಾದ ಕೊರ್ಸೋಟದಿಂದ ಆಗಬಹುದಾದ ವೈಯಕ್ತಿಕ—ಸಾಮೂಹಿಕ ಸಮಾಜಸೇವೆ ಸುಧಾರಣೆಗಳನ್ನು ಮೆಚ್ಚಿಕೊಳ್ಳಬೇಕು. ಇನ್ನೂ ಎಳೆವರೆಯದಲ್ಲೇ ಇರುವ ಈ ಪದವೀಧರ ಬಹುಮುಖ ಪ್ರತಿಭೆಯ ಸಾಹಿತಿಯಿಂದ ಕನ್ನಡಕ್ಕೆ ಅಮೋಘವಾದ ಕೀರ್ತಿಯೂ, ಕೃತಿ ಸಂಪತ್ತೂ ಉಂಟಾಗಿ, ಕನ್ನಡರ ಮನೆಮನೆಯಲ್ಲಿ ಇವರ ಹೆಸರು ಹರ್ಷೋತ್ಸಾಹದಿಂದ ಸ್ಮರಿಸಲ್ಪಡುವಂತಾಗುವುದೆಂಬ ಭವಿಷ್ಯವನ್ನು ಎದೆದುಂಬಿ ನುಡಿಯುತ್ತೇನೆ. ಈ ಕಾವ್ಯವೇದನೆಯಲ್ಲಿ ಅನುಪಮವಾದ ಕಾವ್ಯನಿವೇದನೆಯೂ ಉಂಟೆಂಬುದನ್ನು ಕನ್ನಡದ ಹಿರಿಯ ಕವಿಲೇಖಕರೆಲ್ಲರೂ ಸುಲಭವಾಗಿಯೇ ಗುರುತಿಸಿಕೊಳ್ಳುವರು.

೭—೧೦—೫೧ ಜಿ. ಆರ್. ಪಾಂಡೇಶ್ವರ್ ಹುಬ್ಬಳ್ಳಿ

ಪ್ರಿಯ ವಿ. ಜಿ. ಬಿ.

ನೀವು ಸ್ನೇಹಪೂರ್ವಕವಾಗಿ ಕಳುಹಿಸಿಕೊಟ್ಟ 'ಕಾವ್ಯವೇದನೆ' ನನಲ್ಲಿ ಆ ಮೋದವನ್ನೇ ಉಂಟುಮಾಡಿತು. ಅದಕ್ಕಾಗಿ ಕೃತಜ್ಞ. ಇದರಲ್ಲಿ ಪ್ರಕಟವಾದ ಕೆಲವು ಕವಿತೆಗಳನ್ನು ಮೊದಲೇ ಓದಿ ಸಂತೋಷಪಟ್ಟಿದ್ದೆ. ಈಗ ಅವೆಲ್ಲ ಒತ್ತಟ್ಟಿಗೆ ಸಿಕ್ಕುವ ಸೌಲಭ್ಯವನ್ನು ಒದಗಿಸಿಕೊಟ್ಟದ್ದಕ್ಕಾಗಿ ಆ ಸಂತೋಷ ಇನ್ನೂ ಹೆಚ್ಚು.

ನಿಮ್ಮ ಕವಿತೆಗಳೆಲ್ಲ ಸತ್ವಪೂರ್ಣವಾಗಿ ಕಳಕಳಿಸುತ್ತವೆ. ಜೀವನದ ಅಂತಸ್ಸತ್ವವನ್ನು ಹೀರಿಕೊಂಡು ಕಾವ್ಯವೃಕ್ಷದ ಬೇರಿಗೆ ಸವಿನೀರನ್ನು ಹನಿಸಿವೆ. ನಿತ್ಯಜೀವನದ ಸತ್ಯತೆ ನವ್ಯೋನವವಾಗಿ ಸೂಸಾಡುತ್ತಿದೆ.ಆ ವ್ಯಂಗ್ಯ, ಆ ಹಾಸ್ಯ ಜೀವನವನ್ನು ನೋಡುವ ನಿಮ್ಮ ಕಾವ್ಯ ದೃಷ್ಟಿ ನಿಮಗೇ ಮೀಸಲು, ಕನ್ನಡ ನವೀನ ಕಾವ್ಯಭಾಂಡಾರಕ್ಕೆ ' ಕಾವ್ಯವೇದನೆ 'ಯೊಂದು ಅಪೂರ್ವ ಕಾಣಿಕೆ. ಈ ಹದ ಸುಲಭಸಾಧ್ಯವಲ್ಲ. ಇದನ್ನು ನೀವು ಪಡೆದುಕೊಂಡಿದ್ದೀರಿ. ಹೆಚ್ಚಿಗೇನು ಬರೆಯಲಿ ?

ಗೋಕಾಕ<br>
೩—೧೦—೫೧

ತಮ್ಮ ಪ್ರೀತಿಯ<br>
**ಕೃಷ್ಣಮೂರ್ತಿ ಪುರಾಣಿಕ**

'ಕಾವ್ಯವೇದನೆ' ಓದಿದೆ. ನಿಮ್ಮ ಕಟಕಿಯು ಒಂದು ಉಪಯುಕ್ತ ಕಾರ್ಯ ಮಾಡಿದೆಯೆಂದು ಹೇಳಬಹುದು.

'ನಿಜವಸ್ತು'ವನ್ನು ಇದ್ದಕಿದ್ದಂತೆ ಶಬ್ದದಿಂದ ವರ್ಣಿಸಲು ಅಶಕ್ಯವೆಂದು ವೇದಾಂತಿಗಳು ಹೇಳುವುದು ವಾಡಿಕೆಯಾಗಿದೆ.

ಸಾಹಿತ್ಯವಲ್ಲೂ ಇದಕ್ಕಿಂತಲೂ ಬೇರೆ ಅನುಭವವಿಲ್ಲ. ಸಾಹಿತ್ಯ ಪ್ರಕಾರದಲ್ಲಿ ಈ ದೃಷ್ಟಿಯಿಂದ ಎರಡು ಗುಂಪುಗಳನ್ನು ಮಾಡಬಹುದು: ಇದ್ದುದನ್ನು ಬೆಳಸಿಹೇಳುವ ಪ್ರಕಾರವೊಂದು; ಅದನ್ನೇ ಇಳಿಸಿ ತೋರಿಸುವ ಪ್ರಕಾರವಿನ್ನೊಂದು. ಎರಡೂ ಅತಿಶಯೋಕ್ತಿಗಳೇ. ಆದರೆ, ಅದರ ರೀತಿಗಳು ಮಾತ್ರ ಬೇರೆ. ಮೊದಲನೆಯದು ಮಧುರ ಮನೋಹರ ಮಾತಿನಿಂದ ಮನೋಬುದ್ಧಿಗಳಿಗೆ ಮಾದಕವಾಗಿರುವುದರಿಂದ ಅದು ಹೆಚ್ಚು ಜನರಿಗೆ ಮೆಚ್ಚುಗೆಯಾಗುವುದು. ಎರಡನೆಯದು ಕಟಕಿ, ವಿಡಂಬನ, ಪರಿಹಾಸದ ಮೊನೆಮಾತಿನ ತಿವಿತದಿಂದ ಸ್ವಪ್ನಸುಖದಲ್ಲಿ ಮೈಮರೆತು ಹಾನಿಗೆ ಈಡಾಗುತಿಹ ಜನವನ್ನು ಎಚ್ಚರಿಸಲೆತ್ನಿಸುವುದರಿಂದ ಅದು ಅನೇಕರಿಗೆ ಕಹಿಯೆನಿಸುವುದು ಸಹಜ.

ಸಮಾಜದ ಬುದ್ಧಿ ಭಾವನೆಗಳ ಸಮತೂಕವುಳಿಯಲು ಈ ಎರಡೂ ಪ್ರಕಾರಗಳೂ ಅವಶ್ಯಕವಾಗಿವೆ. ಬಾಳಿನ ಸೊಗಸನ್ನು ತಿಳಿದು ಬಾಳಲು ಮೊದಲನೆಯ ಪ್ರಕಾರದಿಂದ ರಸದೃಷ್ಟಿಯು ಅರಳಬಹುದಾಗಿದ್ದರೆ, ರಸಿಕತೆಯ ಮಾದಕತೆಯಿಂದ ಉಂಟಾದ ವಿಕೃತಿಯನ್ನು ಹೋಗಲಾಡಿಸಿ ನೈಜದ ಅರಿವನ್ನು ತಂದುಕೊಡಲು ಎರಡನೆಯ ಪ್ರಕಾರವೂ ಅಷ್ಟೇ ಅವಶ್ಯಕವಾಗಿದೆ. ಮೊದಲನೆಯದರ ದುಷ್ಪರಿಣಾಮಗಳು ಜನದಲ್ಲಿ ವಿಶೇಷ ಕಾಣಿಸಿಕೊಳ್ಳಹತ್ತಿದಾಗಲೇ ಸಾಮಾಜಿಕ ಮನವು ಕೆರಳಿ ಶ್ರೀವಿಷ್ಣು ಭಟ್ಟರಂತಹರ ಬಾಯಿಂದ ನೋಂಪಿ ಸಾಹಿತಿಗಳ ಹೃದಯದ ನೋವು "ಕಾವ್ಯವೇದನೆ"ಯ ರೂಪದಿಂದ ಪ್ರಕಟವಾಗುತ್ತಿರುತ್ತದೆ. ಈ ಮೊದಲೇ 'ಸಾಯಿತಿ' ಯೆಂದು ಬಳಕೆಗೆ ಬಂದಿರುವ ವಾಕ್ಪ್ರಚಾರವೇ ರಸಸಾಹಿತ್ಯದ ಬಗೆಗೆ ಇತ್ತೀಚೆಗೆ ಸಮಾಜದಲ್ಲಿ ಯಾವ ಬಗೆಯ ಭಾವನೆಯಾಗತೊಡಗಿದೆಯೆಂಬುದನ್ನು ನಿದರ್ಶನಕ್ಕೆ ತರುತ್ತಿದೆ. ಆದುದರಿಂದ ಶ್ರೀ ಭಟ್ಟರ ಈ ವೇದನೆಯು ಕೇವಲ ಅವರ

ವ್ಯಕ್ತಿಗತ ನೋವಾಗಿರದೆ ಅನೇಕರ ಪ್ರಾತಿನಿಧಿಕ ಮನೋಭಾವವಾಗಿದೆಯೆಂದು ಸಿದ್ಧಪಡಿಸಬೇಕಾಗಿಲ್ಲ.

ತಮ್ಮ ಎದುರಾಳಿಯನ್ನು ಯಾರನ್ನೊಬ್ಬನನ್ನೇ ಉದ್ದೇಶಿಸಿ ಅಣಕದ ಚಾಟಿನುಡಿಗಳ ಸುರಿಮಳೆಮಾಡಿ ತಮ್ಮ ಒಳಗಣ ಕಿಚ್ಚನ್ನು ಕೆಲಮಟ್ಟಿಗೆ ತಣಿಸಿಕೊಂಡವರುಂಟು. ಆದರೆ ಶ್ರೀ ಭಟ್ಟರು ಈ ತೆರನಾದ ವ್ಯಕ್ತಿದ್ವೇಷದ ಕಿಚ್ಚಿನಿಂದ ಉರಿದೆದ್ದವರಲ್ಲ. ಅವರ ಈ ವೇದನೆಯ ನುಡಿಗಳಲ್ಲಿ ಯಾವುದೊಂದು ವಿಶಿಷ್ಟ ವ್ಯಕ್ತಿಯು ಕಣ್ಣಮುಂದೆ ಬಾರದೆ, ಒಂದು ವಿಶೇಷ ಪಂಥದ ಅನನುಕರಣೀಯ ಭಾಗವು ಮಾತ್ರ ಚಿತ್ರಿತವಾಗಿದೆ. ಇದು ಶ್ರೀ ಭಟ್ಟರ ಮನಸಿನ ಔದಾರ್ಯ ಮತ್ತು ತಾತ್ವಿಕ ದೃಷ್ಟಿಯ ದ್ಯೋತಕವಾಗಿದೆ. ಮತ್ತು ಈಗಾಗಲೇ ರಸಸಿದ್ಧರೆಂದು ಖ್ಯಾತನಾಮರಾದವರಿಂದ ಹೀಯಾಳಿಸಿಕೊಳ್ಳಬೇಕಾದೀತೆಂಬ ಅಂಜಿಕೆ ಅಳಕುಗಳಿಗೆ ಒಳಗಾಗದೆ ಈ ಪದ್ಯಗಳನ್ನು ಪ್ರಕಟಿಸಿದ್ದುದರಲ್ಲಿ ಅವರ ನೈತಿಕ ಧೈರ್ಯವು ವ್ಯಕ್ತವಾಗುತ್ತದೆ. ಪ್ರಕಾಶನ ಕಾರ್ಯದಲ್ಲಿ ನೆರವಾದ ಅವರ ಗೆಳೆಯರಾದ ಶ್ರೀ ಚಿತ್ರಾಳರೂ ಅಭಿನಂದನಾರ್ಹರಾಗಿದ್ದಾರೆ.

ವಿಜಯಾದಶಮಿ<br>ಮುಂಬೈ<br>೯-೧೦-೫೧

**ಶಂ. ಬಾ. ಜೋಶಿ**

ಅಸಹ್ಯವಾದ ಬಾಳನ್ನೂ ವಿನೋದದಿಂದ ಕಾಣುವ ದೃಷ್ಟಿ, ಎಂಥ ಸಾಮಾನ್ಯ ವಿಷಯದಲ್ಲಿಯೂ ಸ್ವಾರಸ್ಯವನ್ನು ತುಂಬಿ ಹಾಡಲೆಳಸುವ ಪ್ರತಿಭೆ ಹೆಚ್ಚಿನದು. ನಮ್ಮ ಜೀವನದಲ್ಲಿಯ ಅನವಸ್ಥೆಗೆ ಕಾರಣ–ಭಾವನೆಯ ಅತಿರೇಕ. ಆದರಿಂದ

‘ ಬುದ್ಧಿಯ ವಸ್ತುವ ಸಲೆ ಹಿಡಿತರಿಸಿ<br>ಭಾವ ಸಮಾಧಿಯ ಸೆರೆಯಿಂ ಬಿಡಿಸಿ ’

ಇರುವ ಇಂಥ ‘ ಬುದ್ಧಿಗೀತ ’ಗಳೇ ಬುದ್ಧಿ ಕಲಿಸಲುಬೇಕು. ಈ ಉದ್ದೇಶ ಸಾಧನೆಯಲ್ಲಿ **ವಿ. ಜಿ.** ಯವರಿಗೆ ಸಾಹಿತ್ಯದಲ್ಲಿ ದೊರಕಿದ ಸ್ಥಾನ ಭದ್ರವಾಗಿದೆ.

ಕೆನರಾ ಕಾಲೇಜು<br>‘ ಕುಮಟಾ’

**ಪ್ರೊ. ಕೆ. ಜಿ. ಶಾಸ್ತ್ರಿ**<br>( ‘ನಾಗರಿಕ’ದಲ್ಲಿ